ಶರಣಬಸಪ್ಪ, ಪಿ. (ಕೋಲ್ಕಾರ)*

# ಕನಕಗಿರಿಯ ನಾಲ್ಕು ಲೌಕಿಕ ಶಿಲ್ಪ ಪಟ್ಟಿಕೆಗಳು : ಒಂದು ವಿವೇಚನೆ

ಕನಕಗಿರಿ ರಾಯಚೂರ ಜಿಲ್ಲೆಯ ಗಂಗಾವತಿ ತಾಲೂಕಿನ ಒಂದು ದೊಡ್ಡ ಗ್ರಾಮ. ಇಲ್ಲಿ ೧೫-೧೮ ನೇ ಶತಮಾನಗಳ ಅವಧಿಯಲ್ಲಿ ಗುಜ್ಜಲ ವಂಶದ ನಾಯಕರು ತಮ್ಮ ಪಾಳೆಯಗಾರಿಕೆ ನಡೆಸಿದ್ದಾರೆ. ಇವರು ತಮ್ಮ ಆಳ್ವಿಕೆಯ ಕಾಲದಲ್ಲಿ ರಾಜಧಾನಿ ಕನಕಗಿರಿಯಲ್ಲಿ ಅನೇಕ ದೇವಾಲಯ, ಮಂಟಪ, ಬಾವಿ, ಪುಷ್ಕರಣಿ ಕೋಟೆ ಕಟ್ಟಡಗಳನ್ನು ನಿರ್ಮಿಸಿದ್ದಾರೆ. ನಾಯಕರ ಕಾಲದ ಮೂರ್ತಿಶಿಲ್ಪಗಳಲ್ಲಿ ನಾಯಕರಿಗೆ ಸಂಬಂಧಿಸಿದ ಘಟನೆಗಳನ್ನು ಒಳಗೊಂಡಿರುವ ಕೆಲವು ಲೌಕಿಕ ಶಿಲ್ಪಪಟ್ಟಿಕೆಗಳು ವಿಶಿಷ್ಟವಾಗಿವೆ. ಈ ಶಿಲ್ಪಪಟ್ಟಿಕೆಗಳು ಬಿಂಬಿಸುವ ಸನ್ನಿವೇಶ ಅಥವಾ ಸಂದರ್ಭಗಳ ನಿರೂಪಣಾ ಪ್ರಯತ್ನವೇ ಈ ಲೇಖನದ ಉದ್ದೇಶ.

ಕನಕಗಿರಿಯಲ್ಲಿ ಒಟ್ಟು ನಾಲ್ಕು ಲೌಕಿಕ ಶಿಲ್ಪ ಪಟ್ಟಿಕೆಗಳು ಕಂಡುಬರುತ್ತವೆ ಅವುಗಳ ವಿವೇಚನೆ ಇಂತಿದೆ.

ಶಿಲ್ಪಪಟ್ಟಿಕೆ ಒಂದು : ಕಪ್ಪು ಶಿಲೆಯ ಈ ಶಿಲ್ಪಪಟ್ಟಿಕೆಯು ಕನಕಾಚಲಪತಿ ದೇವಾಲಯದ ಮುಂದಿದೆ. ಇದರ ಎತ್ತರ ೮೭ ಸೆಂ.ಮೀ. ಅಗಲ ೧.೬೧ ಮೀ. ಆಳತೆಯುಳ್ಳದ್ದಾಗಿದೆ. ಫಲಕದಲ್ಲಿ ವೃದ್ಧ ಸ್ತ್ರೀಯೊಬ್ಬಳು ಪೀಠದ ಮೇಲೆ ಆಸೀನಳಾಗಿದ್ದಾಳೆ. ಅವಳ ಇಕ್ಕೆಲಗಳಲ್ಲಿ ಇರುವ ಇಬ್ಬರು ದಾಸಿಯರಲ್ಲಿ ಒಬ್ಬಳು ಚಾಮರಧಾರಿಣಿ. ಪೀಠದ ಮುಂದೆ ಅಶ್ವಾರೋಹಿಯೊಬ್ಬ ಇದ್ದು ಬಲಗೈಯಲ್ಲಿ ಖಡ್ಗ ಹಿಡಿದಿದ್ದಾನೆ. ಕುದುರೆಯ ಹಿಂದೆ ಛತ್ರ ಹಿಡಿದ ಸೇವಕ, ಮುಂದೆ ಖಡ್ಗ ಹಿಡಿದು ನಿಂತ ಸೇವಕರ ಶಿಲ್ಪಗಳಿವೆ. ಕುದುರೆಯ ಇನ್ನೊಂದು ಮಗ್ಗುಲಿನಲ್ಲಿ ಇರುವ ವ್ಯಕ್ತಿ ಪತಾಕೆಯನ್ನು ಹಿಡಿದಿದ್ದಾನೆ.

ಹೀಗೆ ಈ ಶಿಲ್ಪಫಲಕದಲ್ಲಿಯ ವ್ಯಕ್ತಿಗಳ ಕ್ರಿಯೆಯಿಂದ ಇಲ್ಲಿಯ ಘಟನೆಯನ್ನು ಹೀಗೆ ನಿರ್ಧರಿಸಬಹುದು ! 'ಅಶ್ವಾರೂಢನಾಗಿ ಯುದ್ಧಕ್ಕೆ ಹೊರಟ ಅರಸನು ರಾಜಮಾತೆಯ ದರ್ಶನಕ್ಕೆ ಬಂದಂತೆ ತೋರುತ್ತದೆ'. ಪೀಠದ ಮೇಲೆ ಕುಳಿತ ಸ್ತ್ರೀಯನ್ನು ರಾಜಮಾತೆ ಎಂದು ಗುರುತಿಸಲು ಮುಖ್ಯ ಕಾರಣ ವೃದ್ಧೆಯ ಲಕ್ಷಣಗಳಿರುವುದು ಮತ್ತು ತಲೆಗೆ ವೃತ್ತಾಕಾರದ ಮುಂಡಾಸನ್ನು ಸುತ್ತಿರುವುದು. ಕನಕಾಚಲಪತಿಯ ಮುಂದಿನ ಮಂಟಪದಲ್ಲಿರುವ ನಾಯಕರ ಪ್ರತಿಮೆಗಳ ಸಾಲಿನಲ್ಲಿ ಇರುವ ದೊರೆಸಾನಿಯ ತಲೆಯ ಮೇಲೆ ಕೂಡ ಇಂತಹ ಮುಂಡಾಸು ಇದೆ. ಆದರೆ ಅದೇ ಸಾಲಿನಲ್ಲಿರುವ ರಾಣಿಯ ತಲೆಯ ಮೇಲೆ ಮುಂಡಾಸು ಇಲ್ಲ. ಹೀಗಾಗಿ ಪೀಠದ ಮೇಲೆ ಕುಳಿತ ಸ್ತ್ರೀಯನ್ನು ದೊರೆಸಾನಿ ಅಥವಾ ರಾಜಮಾತೆಯೆಂದು ನಿರ್ಧರಿಸಬಹುದು. ಇನ್ನು ಅಶ್ವಾರೋಹಿಯು ಅರಸನಾಗಿದ್ದಾನೆ. ಅವನ ಉಡುಪು ಮೇಲೆ ಸೂಚಿಸಿದ ನಾಯಕರ ಪ್ರತಿಮೆಯ ಉಡುಪಿನಂತಿದೆ ಮತ್ತು ಅವನ ಹಿಂದೆ ಮುಂದೆ ಛತ್ರದಾರರು, ಸೇವಕರಿರುವುದರಿಂದ ಈ ಅಶ್ವಧಾರಿ, ಅರಸನೇ ಇರಬೇಕು. ಕುದುರೆಯ ಸನ್ನದ್ಧತೆ ಹಾಗೂ ಇತರ ವ್ಯಕ್ತಿಗಳ ಚಟುವಟಿಕೆಗಳಿಂದ ಅರಸನು ತನ್ನ ತಾಯಿಯಿಂದ ಯುದ್ಧಕ್ಕೆ ಹೋಗಲು ಅನುಮತಿಯನ್ನು ಪಡೆಯುತ್ತಿರುವಂತಿದೆ.

---

* ಇತಿಹಾಸ ಉಪನ್ಯಾಸಕರು, ಶ್ರೀ ಕಲ್ಮಠ ಚನ್ನಬಸವಸ್ವಾಮಿ ಮಹಿಳಾ ಮಹಾವಿದ್ಯಾಲಯ, ಗಂಗಾವತಿ, ರಾಯಚೂರು ಜಿಲ್ಲೆ.

ಶಿಲ್ಪಪಟ್ಟಿಕೆ ಎರಡು : ಗಂಗಾವತಿ ರಸ್ತೆಯ ಎಡ ಬದಿಯ ಗ್ರಾನೈಟ್ ಗುಂಡೊಂದರಲ್ಲಿ ಈ ಶಿಲ್ಪ ಕೆತ್ತನೆ ಇದೆ. ಈ ಶಿಲ್ಪದ ಕೆತ್ತನೆ ಭಾಗ ೯೦ ಸೆಂ.ಮೀ. ಎತ್ತರ ಮತ್ತು ೩.೯೫ ಮೀಟರ್ ಅಗಲವಾಗಿದೆ. ಈ ಶಿಲ್ಪ ಫಲಕದಲ್ಲಿಯ ಶಿಲ್ಪಗಳ ಕ್ರಮ ವಿವರ ಹೀಗಿದೆ. ಮೊದಲಿಗೆ ದೀವಟಿಗೆ ಹಿಡಿದ ವ್ಯಕ್ತಿ, ಖಡ್ಗ ಹಿಡಿದ ಅಶ್ವ ಸವಾರ, ಇಬ್ಬರು ಛತ್ರಧಾರರು, ಕೈಗಳನ್ನು ಅಂಜಲಿ ಮುದ್ರೆಯಲ್ಲಿ ಹಿಡಿದು ನಿಂತ ಇಬ್ಬರು ಸ್ತ್ರೀಯರು ನಂತರ ಈಟಿಯನ್ನು ಹಿಡಿದ ಭಟ, ಪುನಃ ಖಡ್ಗಧಾರಿ ಅಶ್ವಸವಾರ, ಛತ್ರ ಹಿಡಿದ ವ್ಯಕ್ತಿ ನಂತರ ಹುಲಿಯೊಡನೆ ಹೋರಾಡುತ್ತಿರುವ ವ್ಯಕ್ತಿ ಹಾಗೂ ಈಟಿ ಹಿಡಿದ ವ್ಯಕ್ತಿ ಈ ರೀತಿ ಒಟ್ಟು ದೃಶ್ಯವಿದೆ. ಒಟ್ಟಾರೆ ಇದನ್ನು 'ರಾಜ ಪರಿವಾರದ ಪ್ರಯಾಣ'ದ ದೃಶ್ಯವೆಂದು ಹೇಳಬಹುದು. ಮಧ್ಯದಲ್ಲಿ ಇರುವ ಇಬ್ಬರು ಸ್ತ್ರೀಯರು ರಾಣಿಯರಿದ್ದು, ಈ ಇಬ್ಬರಿಗೂ ಛತ್ರ ಹಿಡಿಯುವ ಸೇವಕರಿದ್ದಾರೆ. ಇವರಲ್ಲಿ ಒಬ್ಬನು ಮಾತ್ರ ಛತ್ರವನ್ನು ಹಿಡಿದಿದ್ದರೆ ಇನ್ನೊಬ್ಬ ಅದನ್ನು ಮಡಚಿ ಕಂಕುಳಲ್ಲಿ ಇಟ್ಟುಕೊಂಡಂತಿದೆ. ರಾಣಿಯರ ಮುಂದೆ ಇರುವ ಅಶ್ವಸವಾರ ರಕ್ಷಣಾ ಪಡೆಯುವನಿರಬೇಕು. ರಾಣಿಯರ ನಂತರದ ಅಶ್ವಸವಾರನಿಗೆ ಕುದುರೆಯ ಮುಂದೆ ಅದನ್ನು ಹಿಡಿದು ಹೊರಟ ಸೇವಕ ಹಿಂದೆ ಛತ್ರ ಹಿಡಿದ ಇನ್ನೊಬ್ಬ ಸೇವಕ ಇರುವುದರಿಂದ ಅಶ್ವಸವಾರ ಅರಸನೇ ಎನ್ನಬಹುದು. ಎಲ್ಲ ಶಿಲ್ಪಕ್ಕೂ ಮುಂದೆ ದೀವಟಿಗೆ (ಪಂಜು) ಯನ್ನು ಹಿಡಿದ ವ್ಯಕ್ತಿ ಇರುವುದರಿಂದ ಇದೊಂದು ರಾತ್ರಿಯ ದೃಶ್ಯವೆಂದು ಹೇಳಬಹುದು. ಆದರೆ ಅರಸನ ನಂತರದ ದೃಶ್ಯ ಈ ಸಂದರ್ಭಕ್ಕೆ ಹೊಂದಲಾರದು ಇಲ್ಲಿ ಹುಲಿಯೊಂದಿಗೆ ಹೊರಾಡುತ್ತಿರುವ ವ್ಯಕ್ತಿ ಮತ್ತು ಈಟಿ ಹಿಡಿದ ಭಟರಿರುವುದರಿಂದ ಬಹುಶಃ ರಾತ್ರಿಯ ಈ ಪ್ರಯಾಣದ ಸಂದರ್ಭದಲ್ಲಿ ಬಂದಿರಬಹುದಾದ ಹುಲಿಯನ್ನು ಹಿಂದಿರುವ ಕಾವಲು ಪಡೆಯುವರು ಸಂಹರಿಸುತ್ತಿರಬೇಕು.

ಶಿಲ್ಪಪಟ್ಟಿಕೆ ಮೂರು : ಗ್ರಾನೈಟ್ ಶಿಲೆಯ ಈ ಶಿಲ್ಪ ಫಲಕವು ಹಿರೇನಾಯಕನ ದೇವಾಲಯದಲ್ಲಿದೆ. ಇದರ ಎತ್ತರ ೭೦ ಸೆಂ.ಮೀ., ಅಗಲ ೧.೨ ಮೀಟರ್ ಇದೆ. ಈ ಫಲಕದಲ್ಲಿಯ ದೃಶ್ಯ ಇಂತಿದೆ : ನಾಲ್ಕು ಜನ ಮೇನೆಯನ್ನು ಹೊತ್ತು ಹೊರಟಿದ್ದಾರೆ. ಮೇನೆಯಲ್ಲಿ ಒಬ್ಬ ವ್ಯಕ್ತಿ ಕುಳಿತಿದ್ದಾನೆ. ಮೇನೆಯ ಮುಂದೆ ಅಲಂಕೃತ ಅಶ್ವವನ್ನು ವ್ಯಕ್ತಿಯೊಬ್ಬ ಹಿಡಿದು ಹೊರಟಿದ್ದಾನೆ. ಮೇನೆಯ ಕೆಳಗೆ ಮೂರು ಜನರ ಚಿಕ್ಕ ಆಕೃತಿಗಳಿವೆ ಇವರ ಕೈಗಳಲ್ಲಿ ಕ್ರಮವಾಗಿ ಪತಾಕೆ, ಛತ್ರ ತ್ರಿನಾಮ ಶಂಖ ಚಕ್ರಗಳಿರುವ ಫಲಕ ಇವೆ.

ಇದೊಂದು 'ಮೇನೆಯಲ್ಲಿ ಹೊರಟ ಯತಿ'ಯ ದೃಶ್ಯ ಶಿಲ್ಪವೆಂದು ಹೇಳಬಹುದು. ಏಕೆಂದರೆ ಮೇನೆಯಲ್ಲಿ ಕುಳಿತ ವ್ಯಕ್ತಿಯ ವೇಷ ಭೂಷಣಗಳು ಆತನನ್ನು ಅರಸನೆಂದು ಸೂಚಿಸಲಾರವು. (ಇಲ್ಲಿರುವ ಇತರ ನಾಯಕರ ಪ್ರತಿಮೆಗಳ ವೇಷ ಭೂಷಣಗಳನ್ನು ಗಮನಿಸಿ) ಬಲ ಕೈಯಲ್ಲಿ ಗಂಟೆಯಾಕಾರದ ಒಂದು ವಸ್ತು ಇದೆ. ತಲೆಯ ಮೇಲೆ ಒಂದು ವಿಧವಾದ ಪೇಟವಿದ್ದು, ಅದರಲ್ಲಿ ಅಡ್ಡ, ಉದ್ದ ಗೆರೆಗಳಿವೆ ಮತ್ತು ಬಲಭಾಗದಲ್ಲಿ ಗರಿಯನ್ನು ಸಿಕ್ಕಿಸಲಾಗಿದೆ. ಹೀಗಾಗಿ ಇವನೊಬ್ಬ ಯತಿ ಎಂದು ಹೇಳಬಹುದು. ಸ್ಥಳೀಯ ಕನಕಾಚಲಪತಿ ದೇವಾಲಯದ ರಂಗಮಂಟಪದಲ್ಲಿ ಮೇಲ್ಗಡೆ ಇರುವ ಗಾರೆ ಶಿಲ್ಪಗಳಲ್ಲಿ ಒಂದು ದೃಶ್ಯ ನಾಯಕನು ಒಬ್ಬ ಯತಿಗಳನ್ನು ಸತ್ಕರಿಸುವ ದೃಶ್ಯವಿದೆ. ಈ ಯತಿಗಳನ್ನು ಕನಕಗಿರಿಯಲ್ಲೆ ತಮ್ಮ ಕೊನೆ ಕಾಲ ಕಳೆದ ಚಿದಾನಂದ ಅವಧೂತರೆಂದು ಸ್ಥಳೀಯರ ಹೇಳಿಕೆ. ಇಲ್ಲಿರುವ ಅವಧೂತರ ಗಾರೆ ಶಿಲ್ಪದಂತೆ ಮೇನೆಯಲ್ಲಿರುವ ವ್ಯಕ್ತಿಯ ಶಿಲ್ಪವಿದೆ. ಇನ್ನು ಸ್ಥಳೀಯ ಹೇಳಿಕೆಯಂತೆ ಕನಕಗಿರಿಗೆ ಸಮೀಪವಿರುವ ಅಂಬಾಮಠದಲ್ಲಿದ್ದ ಚಿದಾನಂದವಧೂತರನ್ನು ಕನಕಗಿರಿಗೆ ಸಕಲ ರಾಜ ಮರ್ಯಾದೆಗಳೊಂದಿಗೆ ಮೇನೆಯಲ್ಲಿ ಕರೆದುಕೊಂಡು ಬರಲಾಯಿತು ಎಂದು ಇದೆ. ಈ ಎಲ್ಲಾ ಸಂಗತಿಗಳನ್ನು ಗಮನದಲ್ಲಿರಿಸಿ ಪ್ರಸ್ತುತ ಶಿಲ್ಪವು ಯತಿಯೊಬ್ಬರ ಮೆರವಣಿಗೆಗೆ ಸಂಬಂಧಿಸಿದ್ದು ಎನ್ನಬಹುದು.

ಶಿಲ್ಪಪಟ್ಟಿಕೆ ನಾಲ್ಕು : ಈ ಶಿಲ್ಪ ಪಟ್ಟಿಕೆಯು ಕೂಡ ಹಿರೇನಾಯಕನ ದೇವಾಲಯದಲ್ಲಿದೆ. ಇದು ೭೦ ಸೆಂ.ಮೀ. ಎತ್ತರ, ೧.೯೨ ಮೀ.ಅಗಲವಾಗಿದೆ. ಈ ಫಲಕದಲ್ಲಿಯ ಶಿಲ್ಪ ವಿವರ ಇಂತಿದೆ. ಖಡ್ಗ ಮತ್ತು ಗುರಾಣಿಯನ್ನು ಹಿಡಿದ ವ್ಯಕ್ತಿ, ನಂತರ ಖಡ್ಗ ಮತ್ತು ಕೋವಿಯನ್ನು ಹಿಡಿದ ವ್ಯಕ್ತಿ, ಮೂರನೇಯದಾಗಿ ಎರಡನೇಯ ವ್ಯಕ್ತಿಯ ಬಲಗಾಲಿನ ಹತ್ತಿರ ವ್ಯಕ್ತಿಯ

ಚಿಕ್ಕ ಆಕೃತಿ ಇದ್ದು, ಕೈಯಲ್ಲಿ ಛತ್ರ ಇದೆ. ಇವನ ನಂತರ ಈಟಿ ಹಿಡಿದ ಹಾಗೂ ಬಿಲ್ಲು ಹಿಡಿದ ಇಬ್ಬರ ಶಿಲ್ಪಗಳಿವೆ. ಇಲ್ಲಿ ಖಡ್ಗ ಮತ್ತು ಕೋವಿಯನ್ನು ಹಿಡಿದ ವ್ಯಕ್ತಿಗೆ ಛತ್ರ ಹಿಡಿದ ಸೇವಕನಿರುವುದರಿಂದ ಅವನು ರಾಜನಿರಬೇಕು. ಉಳಿದವರೆಲ್ಲ ಭಟರಿರಬೇಕು. ಒಟ್ಟಿನಲ್ಲಿ ಇದೊಂದು ರಾಜ ಬೇಟೆಗೆ ಹೊರಟ ದೃಶ್ಯ ಎಂದು ಹೇಳಬಹುದು.

ಜೊತೆಗೆ ಈ ಎಲ್ಲಾ ಶಿಲ್ಪಗಳಿಂದ ಸಮಕಾಲೀನ ವೇಷ-ಭೂಷಣಗಳನ್ನು ತಿಳಿಯಬಹುದು ಮತ್ತು ಇವು ನಾಯಕರ ಕಾಲದ ಒಂದೊಂದು ಘಟನೆಯನ್ನು ಬಿಂಬಿಸುತ್ತವೆ.

(ಈ ಲೇಖನವನ್ನು ಸಿದ್ಧಪಡಿಸುವಲ್ಲಿ ಮಾರ್ಗದರ್ಶನಗೈದ ನನ್ನ ಗುರುಗಳಾದ ಡಾ॥ ಅ. ಸುಂದರ ಅವರಿಗೆ ನನ್ನ ಕೃತಜ್ಞತೆಗಳು)